# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 10

ಸದಸ್ಯರ ಹೆಸರು : ಶ್ರೀ ಪ್ರಕಾಶ್ ಕೆ.ರಾಥೋಡ್

ಉತ್ತರಿಸುವ ಸಚಿವರು : ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 29.01.2021

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಕೋವಿಡ್-19 ಮಾರ್ಚ್ 2020ರ ನಂತರ ಕೆ.ಎಸ್.ಆರ್.ಟಿ.ಸಿ ಹಾಗೂ ಇತರರ ನಿಗಮಗಳಿಗೆ ಆಗಿರುವ ನಷ್ಟವೇನು | ಕೋವಿಡ್-19ನ್ನು ತಡೆಗಟ್ಟಲು ಹಾಗೂ ನಿಯಂತ್ರಿಸುವ ನಿಟ್ಟಿನಲ್ಲಿ ವಿಧಿಸಲಾಗಿದ್ದ ಲಾಕ್‌ಡೌನ್ ನಿಂದಾಗಿ ಸಾರಿಗೆ ಸಂಸ್ಥೆಗಳಾದ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ, ವಾಯವ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆ ಮತ್ತು ಈಶಾನ್ಯ ಕರ್ನಾಟಕ ರಸ್ತೆ ಸಾರಿಗೆ ಸಂಸ್ಥೆಗಳು ಸಾರಿಗೆ ಸೇವೆಯನ್ನು ಸಂಪೂರ್ಣವಾಗಿ ಸ್ಥಗಿತಗೊಳಿಸಿರುತ್ತವೆ. ಇದರ ಪರಿಣಾಮವಾಗಿ ಆದಾಯ ಸಂಪೂರ್ಣವಾಗಿ ನಿಂತು ಹೋಗಿದ್ದು, ಆರ್ಥಿಕ ಪರಿಸ್ಥಿತಿಯ ಮೇಲೆ ವ್ಯತಿರಿಕ್ತ ಪರಿಣಾಮ ಬೀರಿರುತ್ತದೆ. ತದನಂತರ ಹಂತಹಂತವಾಗಿ ಸಾರಿಗೆ ಸೇವೆಯನ್ನು ಮುನ್ನೆಚ್ಚರಿಕೆ ಕ್ರಮಗಳೊಂದಿಗೆ ಪುನರಾರಂಭಿಸಲು ಕ್ರಮ ಕೈಗೊಂಡಿದ್ದರೂ, ಸಾರ್ವಜನಿಕರಲ್ಲಿ ಕೋವಿಡ್-19 ಸೋಂಕಿನ ಭೀತಿ ಇರುವುದರಿಂದ, ಸಾರ್ವಜನಿಕ ಸೇವೆಯನ್ನು ಈ ಹಿಂದಿನಂತೆ ಬಳಸುತ್ತಿರುವುದಿಲ್ಲ. ಇದರಿಂದ ಸಾರಿಗೆ ಆದಾಯಕ್ಕೆ ಧಕ್ಕೆ ಉಂಟಾಗಿರುತ್ತದೆ.<br>ಇದರಿಂದ ಸಾರಿಗೆ ಸಂಸ್ಥೆಗಳಿಗೆ ಏಪ್ರಿಲ್-2020 ರಿಂದ ಡಿಸೆಂಬರ್-2020ರ ಅವಧಿಯಲ್ಲಿ ಆಗಿರುವ ನಷ್ಟ ಮತ್ತು ಸರ್ಕಾರದಿಂದ ನೀಡಲಾಗಿರುವ ವಿಶೇಷ ಅನುದಾನದ ವಿವರಗಳು ಈ ಕೆಳಕಂಡಂತಿದೆ: |
| ಆ. | ಪ್ರತಿ ನಿಗಮದ ನಷ್ಟದ ವಿವರ ಒದಗಿಸವುದು | (ರೂ.ಕೋಟಿಗಳಲ್ಲಿ) |

| ನಿಗಮದ ಹೆಸರು | ನಷ್ಟ | ಸರ್ಕಾರದಿಂದ ಬಿಡುಗಡೆಗೊಳಿಸಿರುವ ವಿಶೇಷ ಅನುದಾನ |
|---|---|---|
| ಕ.ರಾ.ರ.ಸಾ.ನಿಗಮ | 829.74 | 563.55 |
| ಬೆಂ.ಮ.ಸಾ.ಸಂಸ್ಥೆ | 696.67 | 519.86 |
| ವಾ.ಕ.ರ.ಸಾ.ಸಂಸ್ಥೆ | 587.77 | 369.42 |
| ಈ.ಕ.ರ.ಸಾ.ಸಂಸ್ಥೆ | 452.53 | 329.89 |
| ಒಟ್ಟು | **2566.71** | **1782.72** |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಇ. | ನಷ್ಟ ಭರಿಸಲು ಸರ್ಕಾರದ ಕೈಗೊಂಡಿರುವ ಕ್ರಮಗಳೇನು? | ಕೊರೋನಾ-19 ಸಂಬಂಧ ಲಾಕ್‌ಡೌನ್ ಅವಧಿ ಮತ್ತು ಮುಂದುವರೆದ ಅವಧಿಯಲ್ಲಿ ಸಾರಿಗೆ ಸಂಚಾರವಿಲ್ಲದೆ ಸಂಸ್ಥೆಗಳು ಆರ್ಥಿಕ ಸಂಕಷ್ಟದಲ್ಲಿದ್ದಾಗ, ಅಧಿಕಾರಿ/ಸಿಬ್ಬಂದಿಗಳಿಗೆ ಏಪ್ರಿಲ್-2020 ರಿಂದ ನವೆಂಬರ್-2020ರವರೆಗಿನ ವೇತನವನ್ನು ಪಾವತಿಸಲು, ಕ.ರಾ.ರ.ಸಾ.ನಿಗಮಕ್ಕೆ - ರೂ.563.55 ಕೋಟಿಗಳು, ಬೆಂ.ಮ.ಸಾ.ಸಂಸ್ಥೆಗೆ - ರೂ.519.86 ಕೋಟಿಗಳು, ವಾ.ಕ.ರ.ಸಾ.ಸಂಸ್ಥೆಗೆ - ರೂ.369.41 ಕೋಟಿಗಳು ಮತ್ತು ಈ.ಕ.ರ.ಸಾ.ಸಂಸ್ಥೆಗೆ - ರೂ.329.89 ಕೋಟಿಗಳಂತೆ, ಸರ್ಕಾರವು ಒಟ್ಟಾರೆಯಾಗಿ ರೂ.1782.71 ಕೋಟಿಗಳ ವಿಶೇಷ ಅನುದಾನವನ್ನು ಬಿಡುಗಡೆಗೊಳಿಸಿರುತ್ತದೆ.<br>ಅಲ್ಲದೇ ನಷ್ಟ ಭರಿಸಲು ಕೈಗೊಂಡಿರುವ ಕ್ರಮಗಳ ವಿವರವನ್ನು ಅನುಬಂಧದಲ್ಲಿ ನೀಡಲಾಗಿದೆ. |

ಸಂಖ್ಯೆ: ಟಿಡಿ 07 ಟಿಸಿಕ್ಯೂ 2021

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯ ಮಂತ್ರಿಗಳು ಹಾಗೂ
ಸಾರಿಗೆ ಸಚಿವರು